ಜೆ.ಟಿ.ಜಯರಾಮಯ್ಯ *
ಸವಿತಾ.ಇ.ಆರ್. **

# ಅರದೇಶಹಳ್ಳಿಯ ಬೃಹತ್ ಶಿಲಾಯುಗದ ನೆಲೆಗಳು

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿರುವ ದೇವನಹಳ್ಳಿ ಹೋಬಳಿ ಅರದೇಶಹಳ್ಳಿಯಲ್ಲಿ ಬೃಹತ್ ಶಿಲಾಯುಗದ ನೆಲೆಗಳು ಕಂಡು ಬಂದಿವೆ. ಈ ಊರಿನಿಂದ ಕೆರೆಗೆ ಹೋಗುವ ರಸ್ತೆಯಲ್ಲಿ ಎರಡೂ ಕಡೆಗಳಲ್ಲಿ ಬೂದಿಹಳ್ಳ ಎಂಬ ಹೆಸರಿನಿಂದ ಕರೆಯುವ ಪ್ರದೇಶವಿದೆ. ಇಲ್ಲಿ ಸುಮಾರು ೧೦-೧೨ ಹೆಕ್ಟೇರ್ ಪ್ರದೇಶದಲ್ಲಿ ಬೂದಿ ಮಿಶ್ರಿತ ಮಣ್ಣು ಕಂಡು ಬರುತ್ತದೆ.

ಈ ಊರಿನ ಸುತ್ತಲಿನ ಜನರು ಈ ಭೂಮಿಯ ಮಣ್ಣನ್ನು ಗೊಬ್ಬರವಾಗಿ ಉಪಯೋಗಿಸಲು ತೆಗೆಯುತ್ತಿದ್ದಾಗ ಕೆಲವು ನಾಣ್ಯಗಳು, ಮಡಕೆಗಳು, ಮೂಳೆಗಳು, ಲೋಹದ ತುಕ್ಕು ಹಿಡಿದ ವಸ್ತುಗಳು ಕಂಡುಬಂದಿವೆ.

ಈ ಪ್ರದೇಶದಲ್ಲಿ ಕಂಡುಬಂದ ಶಿಲಾಯುಗದ ಸಮಾಧಿಗಳನ್ನು ಜನರು ನಿಧಿ ಇದೆ ಎಂಬ ಕಲ್ಪನೆಯಿಂದ ಹಾಳುಗೆಡವಿದ್ದಾರೆ. ಚಪ್ಪಡಿಯಾಕಾರದಲ್ಲಿದ್ದ ಕಲ್ಲುಗಳನ್ನು ಒಡೆದು ತಮ್ಮ ಉಪಯೋಗಕ್ಕೆ ಬಳಸಿಕೊಂಡಿರುವುದರಿಂದ ಹೆಚ್ಚಿನ ಸಮಾಧಿಗಳು ನಾಶವಾಗಿವೆ. ಹಾಳುಗೆಡವಿರುವ ಒಂದು ಸಮಾಧಿಯು ಸುಮಾರು ೧.೩೭ ಮೀ ಅಗಲ, ೧.೮೩ಮೀ ಉದ್ದ, ೧.೫೨ಮೀ. ಗಳಷ್ಟು ಎತ್ತರ ಉಳ್ಳದ್ದಾಗಿದೆ. ನಾಲ್ಕು ಕಡೆಗಳಲ್ಲಿ ನಿಲ್ಲಿಸಿರುವ ಕಲ್ಲುಗಳು ಸುಮಾರು ೨೨-೨೩ ಸೆಂ.ಮೀ. ದಪ್ಪವಾಗಿದೆ. ಮೇಲ್ಭಾಗದಲ್ಲಿ ಹಾಕಿದ್ದ ಚಪ್ಪಡಿಯು ೧೨½ ಅಡಿಗಳಷ್ಟು ಉದ್ದ ಮತ್ತು ೮ ಅಡಿ ಅಗಲವಾಗಿದೆ. ಈ ಸಮಾಧಿಯಲ್ಲಿ ಮೂರು ಮಡಿಕೆಗಳು ದೊರೆತಿದ್ದು ಅದರಲ್ಲಿ ಬೂದಿ ತುಂಬಿದೆ. ಸಮಾಧಿಯಲ್ಲಿ ಕಲ್ಲಿನ ಹಾಸುಗಲ್ಲು ಮತ್ತು ಅರೆಯುವ ಕಲ್ಲುಗಳು ದೊರೆತಿವೆ. ಈ ಮಡಿಕೆಗಳಲ್ಲಿ ಒಂದು ಮಡಿಕೆಯ ಮೇಲೆ ಬಣ್ಣದ ಸಾಲುಗಳನ್ನು ಚಿತ್ರಿಸಲಾಗಿದೆ. ಬೃಹತ್ ಶಿಲಾಯುಗದ ಕಾಲದಲ್ಲಿ ಬಣ್ಣವನ್ನು ಉಪಯೋಗಿಸಿ, ಮಡಕೆಯ ಹೊರಭಾಗವನ್ನು ಚಿತ್ರಿಸಲಾಗುತ್ತಿತ್ತು. (ಗುರುಮೂರ್ತಿ. ಎಸ್., 'ಸೆರಾಮಿಕ್ ಟ್ರೆಡಿಶನ್ಸ್ ಇನ್ ಸೌತ್ ಇಂಡಿಯಾ,' ಪುಟ ೧೯೩, ೧೯೬, ೨೪೨).

ಈ ಸಮಾಧಿಯಲ್ಲಿ ಸಿಕ್ಕಿರುವ ಕೆಲವು ವಸ್ತುಗಳನ್ನು ಸಂಬಂಧಪಟ್ಟ ರೈತರು ಬೇರೆಯವರಿಗೆ ತೋರಿಸಿಲ್ಲವಾದ್ದರಿಂದ ಕೆಲವು ವಿವರಗಳು ದೊರೆಯುತ್ತಿಲ್ಲ. ಎಲ್ಲ ಸ್ಥಳಗಳಲ್ಲಿಯೂ ಜನರು ನಂಬಿರುವಂತೆ ಈ ಬೃಹತ್ ಶಿಲಾಯುಗದ ಕಲ್ಲು ಗೋರಿಗಳನ್ನು ಪಾಂಡವರ ಗುಡಿ ಎಂದು ಕರೆಯುವುದು ವಾಡಿಕೆಯಾಗಿದೆ. ಇವುಗಳಲ್ಲಿ ಮತ್ತು ಹಳೆಯ ದೇವಾಲಯಗಳಲ್ಲಿ ನಿಧಿ ಇರಬಹುದೆಂದು ನಂಬಿದ್ದ ಜನರು ಇವುಗಳನ್ನು ಹಾಳುಗೆಡುವುದು ಸಾಮಾನ್ಯ ವಿಷಯವಾಗಿದೆ.

ಹಾಳುಗೆಡವಿದ್ದ ಚಪ್ಪಡಿ ಕಲ್ಲನ್ನು ಒಡೆದು ಸ್ವಂತ ಕೆಲಸಗಳಿಗೆ, ದ್ರಾಕ್ಷಿ ತೋಟಕ್ಕೆ ಉಪಯೋಗಿಸಿರುವುದು ಕಂಡು ಬಂದಿದೆ. ಈ ಊರಿನ ಕೆರೆಯ ಕೋಡಿ ಬಯಲಿನಲ್ಲಿ ವೃತ್ತಾಕಾರದಲ್ಲಿರುವ ಶಿಲಾಯುಗದ ಸಮಾಧಿಗಳು ಕಂಡು ಬರುತ್ತವೆ. ಒಂದು, ಎರಡು ವೃತ್ತಗಳಿರುವ ಐದು ಸಮಾಧಿಗಳಿವೆ. ಎರಡು ಸಮಾಧಿಗಳನ್ನು ಕದಲಿಸಲಾಗಿದೆ. ಅದರಿಂದ ಹೊರ ತೆಗೆದ ಮಣ್ಣಿನಲ್ಲಿ ಮಡಕೆ, ಕಪ್ಪು ಮತ್ತು ಕಂದು ಮಿಶ್ರಿತ ಮಡಕೆ ಚೂರುಗಳು ಮತ್ತು ಮೂಳೆಯ ಚೂರುಗಳು ಕಂಡುಬರುತ್ತವೆ. ಈ ಸ್ಥಳದ ಸುತ್ತಲೂ ಬೂದಿ

* ಇತಿಹಾಸ ಉಪನ್ಯಾಸಕರು, ವಿವೇಕಾನಂದ ಕಾಲೇಜ್, ರಾಜಾಜಿನಗರ, ಬೆಂಗಳೂರು.
** ನಂ. ೧೧೧, ೧೧ನೇ ಮುಖ್ಯರಸ್ತೆ, ತ್ಯಾಗರಾಜನಗರ, ಬೆಂಗಳೂರು.

ಮಿಶ್ರಿತ ಮಣ್ಣು ಕಂಡು ಬರುತ್ತದೆ. ಈ ಸಂಗ್ರಹವು ಉತ್ತರ ಕರ್ನಾಟಕದ ನವಶಿಲಾಯುಗದ ಬೂದಿ ದಿಬ್ಬವನ್ನು ನೆನಪಿಗೆ ತರುತ್ತದೆ. ಇಲ್ಲಿ ದೊರೆತಿರುವ ಮಡಕೆಗಳು ಬೃಹತ್ ಶಿಲಾಯುಗ ಮತ್ತು ಆದಿ ಐತಿಹಾಸ ಯುಗದ ಮಡಕೆಗಳನ್ನು ಒಳಗೊಂಡಿದೆ ಈ ಸಮಾಧಿಗಳಿಗೆ ವೃತ್ತವನ್ನು ಮಾಡಲು ಕಪ್ಪು ಬೀಡುಗಲ್ಲನ್ನು ಉಪಯೋಗಿಸಲಾಗಿದೆ.

**ಬೃಹತ್ ಶಿಲಾಯುಗದ ಗೋರಿಗಳು**

ಇವುಗಳು ವೃತ್ತಾಕಾರದ ಶಿಲಾ ಗೋರಿಗಳಾಗಿದ್ದು ಇವುಗಳಲ್ಲಿ ಕೆಲವನ್ನು ಅಗೆದು ತೆಗೆಯಲಾಗಿದೆ. ಬೃಹತ್ ಶಿಲಾಯುಗದ ಮಡಕೆ ಚೂರುಗಳು ಸಿಕ್ಕಿವೆ. ಕೆಂಪಾದ ಮಡಕೆಯ ಚೂರುಗಳ ಮೇಲೆ ಬಿಳಿ ಬಣ್ಣದಿಂದ ಗೆರೆ ಮತ್ತು ಚುಕ್ಕೆಗಳನ್ನು ಹಾಕಿದೆ. ಸಮಾಧಿಯಲ್ಲಿ ನಿಧಿ ಇದೆ ಎಂಬ ತಪ್ಪು ಕಲ್ಪನೆಯಿಂದಾಗಿ ನಾಶ ಮಾಡಿರುವುದು ಕಂಡು ಬರುತ್ತದೆ. (ನಿಲುವುಗಲ್ಲುಗಳು) ಕಲ್ಲು ತೊಟ್ಟಿಯನ್ನು ಮುಚ್ಚಿದ ಕಲ್ಲು ೫೦ ಸೆಂ.ಮೀ. ದಪ್ಪ, ೪ ಮೀಟರ್ ಅಗಲ ಮತ್ತು ೫ ಮೀಟರ್ ಉದ್ದವಾಗಿರುತ್ತದೆ. ಮುಚ್ಚಳದ ಕಲ್ಲು ಪೂರ್ವಕ್ಕೆ ಸ್ವಲ್ಪ ಮುಂದಕ್ಕಿದೆ. ಕಪ್ಪುಬೀಡುಗಲ್ಲುಗಳನ್ನು ವೃತ್ತಕ್ಕೆ ಬಳಸಲಾಗಿದೆ. ಎರಡು, ಮೂರು ವೃತ್ತಗಳಲ್ಲಿ ಇದು ಕಂಡುಬರುತ್ತದೆ.

ಈ ರೀತಿಯಲ್ಲಿರುವ ಈ ಬೃಹತ್ ಶಿಲಾಯುಗದ ಸಮಾಧಿಗಳು ಈ ಸ್ಥಳ ಪ್ರಾಚೀನ ಜನವಸತಿಯ ಬಗ್ಗೆ ಮಾಹಿತಿ ನೀಡುವುದಲ್ಲದೆ ಈ ಸ್ಥಳವು ಶಿಲಾಯುಗದ ಸಂಸ್ಕೃತಿಯ ನೆಲೆಯಾಗಿ ರೂಪುಗೊಂಡಿತ್ತು ಎಂಬುದು ಸಂಶೋಧನೆಯಿಂದ ತಿಳಿದು ಬಂದಿದೆ.

(ಈ ಕ್ಷೇತ್ರಕಾರ್ಯದಲ್ಲಿ ಸಹಕರಿಸಿದ ಲೋಕೇಶ. ಎಂ. ಮತ್ತು ಮಾಹಿತಿ ನೀಡಿದ ಕನ್ನಡ ಉಪನ್ಯಾಸಕರಾದ ಎಂ.ಮುನಿಕೆಂಪಣ್ಣನವರಿಗೆ ನಮ್ಮ ಕೃತಜ್ಞತೆಗಳು).

○